# ಕರ್ನಾಟಕ ವಿಧಾನ ಪರಿಷತ್ತು

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಬಿ.ಕೆ ಹರಿಪ್ರಸಾದ್**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 340**

**ಉತ್ತರಿಸಬೇಕಾದ ದಿನಾಂಕ : 14.09.2021**

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣ ಭಾಗದ ಹೈನುಗಾರಿಕೆಯಲ್ಲಿ ತೊಡಗಬಯಸುವ ನಿರುದ್ಯೋಗಿಗಳಿಗೆ ಶೂನ್ಯ ಬಡ್ಡಿದರದಲ್ಲಿ ಸಾಲ ನೀಡುವ ಸರ್ಕಾರದ ಯೋಜನೆ ಯಾವ ಹಂತದಲ್ಲಿದೆ: (ಸಂಪೂರ್ಣ ವಿಸ್ತೃತ ಮಾಹಿತಿ ಒದಗಿಸುವುದು) | ಸಹಕಾರ ಸಂಘಗಳ ಮೂಲಕ ಹೈನುಗಾರಿಕೆಯಲ್ಲಿ ತೊಡಗಿರುವ ಸದಸ್ಯರಿಗೆ ದುಡಿಯುವ ಬಂಡವಾಳಕ್ಕಾಗಿ ರೂ.2.00 ಲಕ್ಷದವರೆಗೆ ಶೂನ್ಯ ಬಡ್ಡಿ ದರ ಅನ್ವಯವಾಗುವಂತೆ ಅಲ್ಪಾವಧಿ ಸಾಲ ವಿತರಿಸಲು 2020–21 ರಿಂದ ಜಾರಿಗೆ ತರಲು ದಿ:22.07.2020 ರಂದು ಆದೇಶ ಹೊರಡಿಸಲಾಗಿದೆ.<br>2021–22 ನೇ ಸಾಲಿಗೂ ಸಹ ಈ ಯೋಜನೆಯನ್ನು ಬೆಳೆ ಸಾಲ ವಿತರಿಸುವ ಯೋಜನೆಗೆ ವಿಲೀನಗೊಳಿಸಿ ಮುಂದುವರೆಸುವ ಬಗ್ಗೆ ಸರ್ಕಾರದ ಪರಿಶೀಲನೆಯಲ್ಲಿರುತ್ತದೆ.<br>ಇದಲ್ಲದೇ ಗ್ರಾಮೀಣ ಭಾಗದ ಸದಸ್ಯರು ಹೈನುಗಾರಿಕೆ ಕೈಗೊಳ್ಳಲು ರಿಯಾಯಿತಿ ಬಡ್ಡಿದರದಲ್ಲಿ ಸಾಲ ಪಡೆಯಲು ಈ ಕೆಳಕಂಡ ಯೋಜನೆಗಳು ಇರುತ್ತವೆ.<br>1. 2020–21 ನೇ ಸಾಲಿಗೆ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲವನ್ನು ಶೇ.3 ರ ಬಡ್ಡಿ ದರದಲ್ಲಿ ರೂ.10.00 ಲಕ್ಷಗಳವರೆಗೆ ವಿತರಿಸುವ ಯೋಜನೆಯನ್ನು ಸಹಕಾರ ಸಂಘಗಳ ಮೂಲಕ ಜಾರಿಗೊಳಿಸಲು ದಿ:7.10.2020 ರಂದು ಆದೇಶ ಹೊರಡಿಸಲಾಗಿದ್ದು, ಇದರಲ್ಲಿ ಹೈನುಗಾರಿಕೆ ಕೈಗೊಳ್ಳಲು ರಾಸು ಖರೀದಿ, ಕೊಟ್ಟಿಗೆ ಮನೆ ನಿರ್ಮಾಣ ಮುಂತಾದ ಮೂಲಭೂತ ಸೌಕರ್ಯಗಳನ್ನು ಹೊಂದಲು ಅವಕಾಶ ಇರುತ್ತದೆ.<br>2. 2020–21 ನೇ ಸಾಲಿಗೆ ಪುರುಷ ಸ್ವ–ಸಹಾಯ ಗುಂಪುಗಳಿಗೆ ಸಹಕಾರ ಸಂಘಗಳ ಮೂಲಕ ರೂ.5.00 ಲಕ್ಷಗಳವರೆಗಿನ ಸಾಲವನ್ನು ನಿವ್ವಳ ಶೇ.4 ರ ಬಡ್ಡಿ ದರದಲ್ಲಿ ವಿತರಿಸುವ ಯೋಜನೆಯನ್ನು ಜಾರಿಗೊಳಿಸಿದ್ದು ದಿ:13.10.2020 ರಂದು ಆದೇಶ ಹೊರಡಿಸಲಾಗಿದ್ದು, ಇದರಲ್ಲಿ ಪುರುಷ ಸ್ವ–ಸಹಾಯ ಗುಂಪುಗಳ ಸದಸ್ಯರು ಸಹ ಹೈನುಗಾರಿಕೆ ಕೈಗೊಳ್ಳಲು ಅವಕಾಶ ಇರುತ್ತದೆ. |
| ಆ) | ಸದರಿ ಯೋಜನೆಯ ಫಲಾನುಭವಿಗಳು ಹೊಂದಿರಬೇಕಾದ ಮಾನದಂಡಗಳೇನು; (ಸಂಪೂರ್ಣ ವಿಸ್ತೃತ ಮಾಹಿತಿ ಒದಗಿಸುವುದು) | ಸಹಕಾರ ಸಂಘಗಳ ಮೂಲಕ ಸಾಲ ಪಡೆಯಲು ಫಲಾನುಭವಿಗಳು ಹೊಂದಿರಬೇಕಾದ ಮಾನದಂಡಗಳು ಈ ಕೆಳಗಿನಂತಿರುತ್ತವೆ.<br>• **ಶೂನ್ಯ ಬಡ್ಡಿ ದರದಲ್ಲಿ ದುಡಿಯುವ ಬಂಡವಾಳ ಸಾಲಕ್ಕೆ ಇರುವ ಮಾನದಂಡಗಳು:–**<br>1. ಫಲಾನುಭವಿಗಳು ಹಾಲು ಉತ್ಪಾದಕ ಸಹಕಾರ ಸಂಘಗಳಲ್ಲಿ ಹಾಲು ಪೂರೈಸುತ್ತಿರಬೇಕು.<br>2. ಸದಸ್ಯರು ಈ ಸಂಘಗಳ ಮೂಲಕ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ/ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಅರ್ಜಿ ಸಲ್ಲಿಸಬೇಕು. |

| | | |
|---|---|---|
| | | • **<u>ಹೈನುಗಾರಿಕೆ ಕೈಗೊಳ್ಳಲು ಶೇ.3 ರ ಬಡ್ಡಿ ದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲದ ಮಾನದಂಡಗಳು:-</u>**<br>1. ಫಲಾನುಭವಿಗಳು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು / ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಲ್ಲಿ ಸದಸ್ಯರಾಗಿರತಕ್ಕದ್ದು.<br>2. ಹೈನುಗಾರಿಕೆ ಮೇವು ಬೆಳೆಯಲು ಭೂಮಿ ಹೊಂದಿರಬೇಕು.<br>3. ಇತರೇ ಯಾವುದೇ ಬ್ಯಾಂಕುಗಳಲ್ಲಿ ಈ ಹೈನುಗಾರಿಕೆ ಉದ್ದೇಶಕ್ಕೆ ಸಾಲ ಪಡೆದಿರಬಾರದು.<br>• **<u>ಹೈನುಗಾರಿಕೆ ಕೈಗೊಳ್ಳಲು ಶೇ.4 ರ ಬಡ್ಡಿ ದರದಲ್ಲಿ ಸ್ವಸಹಾಯ ಗುಂಪುಗಳ ಸಾಲದ ಮಾನದಂಡಗಳು</u>**<br>1. ಫಲಾನುಭವಿಗಳು ಸ್ವಸಹಾಯ ಗುಂಪುಗಳಲ್ಲಿ ಸದಸ್ಯರಾಗಿರಬೇಕು.<br>2. ಸದರಿ ಸ್ವ-ಸಹಾಯ ಗುಂಪುಗಳು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಅಥವಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಉಳಿತಾಯ ಖಾತೆ ಪ್ರಾರಂಭಿಸಿ. 6 ತಿಂಗಳವರೆಗೆ ಉಳಿತಾಯ ಮಾಡಿ ಕಾಲ ಕಾಲಕ್ಕೆ ಸಭೆ ಜರುಗಿಸಿರಬೇಕು.<br>3. ಇತರೇ ಯಾವುದೇ ಬ್ಯಾಂಕುಗಳಲ್ಲಿ ಸಾಲ ಪಡೆದಿರಬಾರದು. |
| ಇ) | ಕಳೆದ ಮೂರು ವರ್ಷಗಳಲ್ಲಿ ಸದರಿ ಯೋಜನೆ ಅಡಿಯಲ್ಲಿ ಸ್ವೀಕೃತವಾದ, ಪುರಸ್ಕೃತಗೊಂಡ ಹಾಗೂ ತಿರಸ್ಕೃತಗೊಂಡ ಅರ್ಜಿಗಳ ಸಂಖ್ಯೆ ಎಷ್ಟು; (ಸಂಪೂರ್ಣ ವಿಸ್ತೃತ ಮಾಹಿತಿ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ ಹೈನುಗಾರಿಕೆಗೆ ರೂ.2.00 ಲಕ್ಷಗಳ ಶೂನ್ಯ ಬಡ್ಡಿ ದರದಲ್ಲಿ ದುಡಿಯುವ ಬಂಡವಾಳ ಸಾಲ ಒದಗಿಸುವ ಯೋಜನೆಯಲ್ಲಿ ರಾಜ್ಯದಲ್ಲಿನ ಸಹಕಾರ ಸಂಘಗಳ ಮೂಲಕ 61,835 ಫಲಾನುಭವಿಗಳಿಗೆ ರೂ.117.05 ಕೋಟಿ ಸಾಲ ಮಂಜೂರು ಮಾಡಿದ್ದು, 6,309 ಜನರ ಸಾಲದ ಅರ್ಜಿಗಳು ತಿರಸ್ಕೃತಗೊಂಡಿರುತ್ತವೆ. ಇತರೇ ವಾಣಿಜ್ಯ ಬ್ಯಾಂಕುಗಳಲ್ಲಿ ಉಳಿತಾಯ ಖಾತೆ / ಸಾಲ ಇರುವುದರಿಂದ, ಹಾಲು ಪೂರೈಸದೇ ಇರುವುದರಿಂದ, ರೈತರು ದಾಖಲೆಗಳನ್ನು ಒದಗಿಸದೇ ಇರುವುದರಿಂದ ಡಿಸಿಸಿ ಬ್ಯಾಂಕುಗಳು ಅರ್ಜಿಗಳನ್ನು ತಿರಸ್ಕರಿಸಿರುತ್ತವೆ. ಜಿಲ್ಲಾವಾರು ವಿಸ್ತೃತ ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಈ) | ಕಳೆದ 5 ವರ್ಷಗಳಲ್ಲಿ ರಾಜ್ಯಾದ್ಯಂತ ಸದರಿ ಯೋಜನೆಗೊಳಪಟ್ಟ ಫಲಾನುಭವಿಗಳ ಸಂಖ್ಯೆ ಹಾಗೂ ನೀಡಲಾದ ಮೊತ್ತವೆಷ್ಟು? ಜಿಲ್ಲಾವಾರು ವಿವರ ಒದಗಿಸುವುದು) | |

**ಸಂಖ್ಯೆ: ಸಿಒ 248 ಸಿಎಲ್‌ಎಸ್ 2021**

**(ಎಸ್.ಟಿ ಸೋಮಶೇಖರ್)**

ಸಹಕಾರ ಸಚಿವರು

(3)

<u>ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯ ಶ್ರೀ ಬಿ.ಕೆ. ಹರಿಪ್ರಸಾದ್ ( ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 340 ಗೆ ಅನುಬಂಧ-1</u>

**ಪಶುಸಂಗೋಪನೆಗೆ ಶೂನ್ಯ ಬಡ್ಡಿ ದರದಲ್ಲಿ ದುಡಿಯುವ ಬಂಡವಾಳ ಸಾಲ ವಿತರಿಸುವ ಯೋಜನೆಯಲ್ಲಿ ಸಹಕಾರ ಸಂಘಗಳು ಸಾಲ ಮಂಜೂರು ಮಾಡಿದ ಮತ್ತು ಅರ್ಜಿ ತಿರಸ್ಕರಿಸಿದ ವಿವರ**

**(ರೂ. ಲಕ್ಷಗಳಲ್ಲಿ)**

**(ರೂ.ಲಕ್ಷ)**

| ಕ್ರ. ಸಂ | ಡಿಸಿಸಿ ಬ್ಯಾಂಕಿನ ಹೆಸರು | ಬ್ಯಾಂಕುಗಳಿಗೆ ಸಾಲಕ್ಕಾಗಿ ಬಂದ ಅರ್ಜಿಗಳ ವಿವರ | | ಮಂಜೂರು ಮಾಡಿದ ಸಾಲದ ವಿವರ | | ಸಾಲ ವಿತರಣೆ ವಿವರ | | ಅರ್ಜಿ ತಿರಸ್ಕರಿಸಿದ ವಿವರ | |
|---|---|---|---|---|---|---|---|---|---|
| | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | Bagalkot | 5707 | 1660.67 | 5707 | 1660.67 | 1426 | 324.47 | 0 | 0.00 |
| 2 | Bangalore | 1544 | 394.54 | 1544 | 394.54 | 891 | 215.82 | 0 | 0.00 |
| 3 | Belgaum | 1940 | 536.90 | 1940 | 536.90 | 1940 | 536.90 | 0 | 0.00 |
| 4 | Bellary | 2015 | 543.56 | 2015 | 543.56 | 2015 | 543.56 | 0 | 0.00 |
| 5 | Bidar | 4457 | 623.98 | 578 | 80.92 | 561 | 77.56 | 3230 | 452.20 |
| 6 | Bijapur | 272 | 74.63 | 154 | 42.88 | 154 | 42.88 | 118 | 31.75 |
| 7 | Chikmagalur | 1505 | 609.35 | 1505 | 609.35 | 1144 | 476.75 | 0 | 0.00 |
| 8 | Chitradurga | 1725 | 426.72 | 1725 | 426.72 | 1725 | 426.72 | 0 | 0.00 |
| 9 | Davangere | 1153 | 174.86 | 1153 | 174.86 | 1153 | 174.86 | 0 | 0.00 |
| 10 | Gulburga | 0 | 0.00 | 0 | 0.00 | 0 | 0.00 | 0 | 0.00 |
| 11 | Hassan | 26380 | 2638.00 | 22583 | 2258.30 | 22451 | 2245.10 | 2900 | 290.00 |
| 12 | KCCBDharwad | 635 | 630.00 | 673 | 292.68 | 673 | 292.68 | 0 | 0.00 |
| 13 | North Kanara | 1291 | 410.00 | 1291 | 410.00 | 1291 | 410.00 | 0 | 0.00 |
| 14 | Kodagu | 179 | 28.55 | 118 | 18.92 | 118 | 18.92 | 61 | 9.63 |
| 15 | Kolar | 2853 | 562.40 | 2853 | 562.40 | 2539 | 448.95 | 0 | 0.00 |
| 16 | Mandya | 2902 | 492.00 | 2902 | 492.00 | 2902 | 492.00 | 0 | 0.00 |
| 17 | Mysore | 3520 | 664.14 | 3520 | 664.14 | 3520 | 664.14 | 0 | 0.00 |
| 18 | Raichur | 2120 | 594.00 | 2120 | 594.00 | 1767 | 485.00 | 0 | 0.00 |
| 19 | Shimoga | 730 | 104.32 | 730 | 104.32 | 730 | 104.32 | 0 | 0.00 |
| 20 | South Canara | 7122 | 1613.29 | 7122 | 1613.29 | 7122 | 1613.29 | 0 | 0.00 |
| 21 | Tumkur | 1602 | 224.28 | 1602 | 224.28 | 1602 | 224.28 | 0 | 0.00 |
| | Total | **69652** | **13006.19** | **61835** | **11704.73** | **55724** | **9818.20** | **6309** | **783.58** |

Ashwini. Y.T

**ಸಹಕಾರ ಸಂಘಗಳ ಸಹಾಯಕ ನಿಬಂಧಕರು(ಪತ್ತು)**